# ನೈದಾನಿಕ ಮನೋವಿಜ್ಞಾನ

## ಇಂದಿರಾ ಜೈಪ್ರಕಾಶ್

ಮಾನಸಿಕ ತೊಂದರೆಗಳಿಗೆ ಚಿಕಿತ್ಸೆ ನೀಡಲು ಮತ್ತು ಮನೋ ಸ್ವಾಸ್ಥ್ಯವನ್ನು ಉತ್ತಮಪಡಿಸಲು ಅಪಸಾಮಾನ್ಯತೆಯ ಜ್ಞಾನ ಮತ್ತು ಅದರ ಅಧ್ಯಯನದಿಂದ ದೊರೆತ ಮಾಹಿತಿ ಮತ್ತು ಅನುಭವಗಳನ್ನು ಉಪಯೋಗಿಸುವ ಕ್ಷೇತ್ರವೇ ನೈದಾನಿಕ ಮನೋವಿಜ್ಞಾನ. ಇದು ಅನ್ವಯಿಕ ಶಾಖೆಯಾಗಿದ್ದು ಅಪಸಾಮಾನ್ಯ ಮನೋವಿಜ್ಞಾನ ಮತ್ತು ಇತರ ಕ್ಷೇತ್ರಗಳ ವೈಜ್ಞಾನಿಕ ಮಾಹಿತಿಗಳನ್ನು ಬಳಸಿಕೊಂಡು ವಿವಿಧ ರೀತಿಯ ಮನೋರೋಗಗಳಲ್ಲದೆ ಜೀವನದ ಇತರ ಸಮಸ್ಯೆಗಳಿಗೆ ಪರಿಹಾರ ಹುಡುಕುತ್ತದೆ.

1896ನಲ್ಲಿ ಪೆನ್ಸಿಲ್ವೇನಿಯಾ ವಿಶ್ವವಿದ್ಯಾಲಯದಲ್ಲಿ ಮೊದಲ ನೈದಾನಿಕ ದವಾಖಾನೆ ಸ್ಥಾಪಿಸಿದ ಲೈಟ್ನರ್ ವಿಟ್ಮರ್ (Lightner Witmer) ನನ್ನು ಆಧುನಿಕ 'ನೈದಾನಿಕ ಮನೋವಿಜ್ಞಾನದ ಜನಕ' ಎನ್ನಲಾಗಿದೆ. ಈಗಾಗಲೇ ಹಿಂದಿನ ಅಧ್ಯಾಯಗಳಲ್ಲಿ ಉಲ್ಲೇಖಿಸಿದಂತೆ, 18ನೆಯ ಶತಮಾನದ ಉತ್ತರಾರ್ಧದಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ಮನೋವಿಜ್ಞಾನದ ಪ್ರಯೋಗಶಾಲೆಗಳು ಸ್ಥಾಪಿತವಾಗಿದ್ದವು. ಇಲ್ಲಿ ಮಾಡಲಾದ ಅಧ್ಯಯನಗಳು ಜ್ಞಾನವರ್ಧನೆಯ ಮೇಲೆ ಕೇಂದ್ರೀಕರಿಸಿದ್ದು ಅನ್ವಯಿಕತೆಗೆ ಹೆಚ್ಚು ಗಮನ ನೀಡಿರಲಿಲ್ಲ. ವೂನ್ಟ್ ನ ಶಿಷ್ಯನಾಗಿದ್ದ ವಿಟ್ಮರ್ ಸರಿಯಾಗಿ ಕಾಗುಣಿತ ಬಾರದ ಬಾಲಕನಿಗೆ ಚಿಕಿತ್ಸೆ ಮಾಡಲು ಒಪ್ಪಿದ್ದು ನೈದಾನಿಕತೆಯ ನಿರಾಡಂಬರ ಪ್ರಾರಂಭ. ಈ ಕಾರ್ಯದಲ್ಲಿ ಸಫಲನಾದ ವಿಟ್ಮರ್ ನೈದಾನಿಕ ದವಾಖಾನೆ ತೆರೆದು, ವಿದ್ಯಾರ್ಥಿಗಳಿಗೆ ತರಬೇತಿ ನೀಡಲು ಪ್ರಾರಂಭಿಸಿದ. 1907 ರಲ್ಲಿ ಈ ವಿಷಯಕ್ಕೆ ಸಂಬಂಧಿಸಿದಂತೆ 'The Psychological Clinic (ದಿ ಸೈಕಲಾಜಿಕಲ್ ಕ್ಲಿನಿಕ್)' ಎಂಬ ವಿದ್ವತ್ ಪತ್ರಿಕೆ ಪ್ರಾರಂಭಿಸಿದ. ನೈದಾನಿಕ ಮನೋವಿಜ್ಞಾನ ಎಂಬ ಹೆಸರನ್ನು ಈ ಕ್ಷೇತ್ರಕ್ಕೆ ನೀಡಿ ಅದನ್ನು "ವ್ಯಕ್ತಿಗಳಲ್ಲಿ ಬದಲಾವಣೆಯನ್ನು ತರಲು ಅವರನ್ನು ಅವಲೋಕನ ಅಥವಾ ಪ್ರಯೋಗಾತ್ಮಕ ವಿಧಾನಗಳ ಮೂಲಕ ಅಧ್ಯಯನ ಮಾಡುವುದು" ಎಂದು ವ್ಯಾಖ್ಯಾನಿಸಿದ. ಕ್ರಮೇಣವಾಗಿ ಇವನ ಉದಾಹರಣೆಯನ್ನು ಅನುಸರಿಸಿ 1914ರ ವೇಳೆಗೆ 26 ಇಂತಹ ದವಾಖಾನೆಗಳು ಉತ್ತರ ಅಮೇರಿಕಾದಲ್ಲಿ ತೆರೆಯಲ್ಪಟ್ಟಿದ್ದವು.

ಚಾರಿತ್ರಿಕವಾಗಿ ಮನೋರೋಗಗಳನ್ನು ಗುಣಪಡಿಸುವ ಪ್ರಯತ್ನಗಳು ಶತಮಾನಗಳಷ್ಟು ಹಳೆಯದು. ಕ್ರಿ.ಪೂ 400 ರಲ್ಲಿ ಗ್ರೀಕರು, ಕ್ರಿ,ಪೂ 2 ರಲ್ಲಿ ಚೀನಿಯರು, ಭಾರತೀಯರು ಮನೋರೋಗಗಳ ಚಿಕಿತ್ಸಾ ವಿಧಾನಗಳನ್ನು ಬಳಸುತ್ತಿದ್ದರು. 18 ಮತ್ತು 19ನೆಯ ಶತಮಾನದಲ್ಲಿ ಮನೋವಿಜ್ಞಾನ ಕ್ಷೇತ್ರದಲ್ಲಿ ಗಮನಾರ್ಹ ಬದಲಾವಣೆಗಳನ್ನು ತರಲು ಅಧ್ಯಯನ ಕ್ಷೇತ್ರದಲ್ಲಿ ವೈಜ್ಞಾನಿಕ ವಿಧಾನಗಳನ್ನು ಅಳವಡಿಸಿಕೊಳ್ಳುವುದು

ಪ್ರಾರಂಭವಾಯಿತು. ಮನೋವೈದ್ಯಕೀಯದಲ್ಲಿ ಅಮಾನುಷ ರೀತಿಗಳು ಮತ್ತು ಧಾರ್ಮಿಕ ವಿಧಿಗಳು ಕಡಮೆಯಾಗಿ ಮನೋರೋಗಿಗಳ ಮಾನವೀಯ ಚಿಕಿತ್ಸೆ ಪ್ರಾರಂಭವಾಯಿತು. ಪಿನೇಲ್, ಟ್ಯೂಕ್, ಡೆಕ್ಸ್, ರಶ್ ಮುಂತಾದವರ ಪ್ರಭಾವದಿಂದ ಮನೋವೈದ್ಯಕೀಯ ಆಸ್ಪತ್ರೆಗಳು ಸುಧಾರಣೆಯಾದವು. ಸಿಗ್ಮಂಡ್ ಫ್ರಾಯ್ಡ್ ಮತ್ತು ಅವನಿಂದ ಪ್ರಭಾವಿತರಾದವರು ಮನೋಚಿಕಿತ್ಸೆಯಲ್ಲಿ ಹೊಸ ವಿಧಾನಗಳನ್ನು ಕಂಡುಹಿಡಿದರಲ್ಲದೆ ವರ್ತನಾವಾದ, ಮಾನವತಾವಾದ, ಪರಾಮರ್ಶನ ಮುಂತಾದ ವಿಧಾನಗಳು ತಲೆ ಎತ್ತಿದವು. ಫ್ರಾನ್ಸಿಸ್ ಗಾಲ್ಟನ್‌ನ ಚಿಂತನೆಗಳನ್ನು ಜೇಮ್ಸ್ ಮಕೀನ್ ಕೆಟೆಲ್, ಆಲ್ಫ್ರೆಡ್ ಬಿನೆ ಮುಂತಾದವರು ಅಭಿವೃದ್ಧಿಪಡಿಸಿದ ಫಲವಾಗಿ ವ್ಯಕ್ತಿಮಾಪನ ಕ್ಷೇತ್ರವು ಬೆಳೆಯಿತು. ನರವಿಜ್ಞಾನ, ಮನೋಔಷಧ ಕ್ಷೇತ್ರಗಳು ಪ್ರಗತಿ ಸಾಧಿಸಿದವು. ಮನೋವೈದ್ಯಕೀಯದಲ್ಲಿ ಇಮಿಲ್ ಕ್ರೇಪೆಲಿನ್ ಮನೋರೋಗಗಳ ಅಧ್ಯಯನವನ್ನು ವ್ಯವಸ್ಥಿತಗೊಳಿಸಿದ. ಇಂತಹ ಅನೇಕ ಕಾರಕಗಳು ಈ ಕ್ಷೇತ್ರದ ಅಭಿವೃದ್ಧಿಗೆ ಕಾರಣವಾದವು.

ಈ ಕ್ಷೇತ್ರದ ಬೆಳವಣಿಗೆಯಲ್ಲಿ ಅನೇಕ ಮೈಲಿಗಲ್ಲುಗಳನ್ನು ಗುರುತಿಸಬಹುದು. 1892ರಲ್ಲಿ ಸ್ಟ್ಯಾನ್ಲಿ ಹಾಲ್‌ನ ಶ್ರಮದಿಂದ ಅಮೇರಿಕನ್ ಸೈಕಲಾಜಿಕಲ್ ಅಸೋಸಿಯೇಷನ್ (American Psychological Association (APA)) ಸ್ಥಾಪಿತವಾಯಿತು. ಮುಂದೆ ಇದು ಮನೋವಿಜ್ಞಾನದ ವೃತ್ತಿಪರ ವಿಕಾಸದಲ್ಲಿ ಪ್ರಮುಖ ಪಾತ್ರ ವಹಿಸಿತು. ನಂತರ ಎರಡು ವಿಶ್ವಮಹಾಸಮರಗಳ ಅವಧಿಯಲ್ಲಿ ಮತ್ತು ರಾಬರ್ಟ್ ಯೆರ್ಕೀಸ್ (Robert Yerkes) ನ ನಾಯಕತ್ವದಲ್ಲಿ ಹೊಸದಾಗಿ ಸೇರಿದ ಸೈನಿಕರ ಪರೀಕ್ಷೆಗೆಂದು ‘ಆರ್ಮಿ ಆಲ್ಫಾ ಮತ್ತು ಬೀಟ (Army Alpha and Beta)’ ಎಂಬ ಮನೋಮಾಪನ ಪರೀಕ್ಷೆಗಳು ವಿನ್ಯಾಸಗೊಂಡವು. 1917ರಲ್ಲಿ ರಾಬರ್ಟ್ ವುಡ್‌ವರ್ಥ್ (Robert Woodworth) ಅನಾನುಭವಿ ಸೈನಿಕರಲ್ಲಿ ಅಪಸಾಮಾನ್ಯ ವರ್ತನೆಯನ್ನು ಗುರುತಿಸಲು ಮತ್ತು ಅಳೆಯಲು ವೈಯಕ್ತಿಕ ದತ್ತಾಂಶ ಸಮೀಕ್ಷೆ ಎಂಬ ವ್ಯಕ್ತಿತ್ವ ಪರೀಕ್ಷೆಯನ್ನು ರೂಪಿಸಿದ್ದು, ಇದು ಅವನ ಹೆಸರಿನಿಂದಲೇ ಗುರುತಿಸಲ್ಪಡುತ್ತದೆ. 1921ರಲ್ಲಿ ಹೆರ್ಮನ್ ರೋಷ್ಯಾ(Hermann Rorschach) ಪ್ರಥಮ ಪ್ರಕ್ಷೇಪಣ ಪರೀಕ್ಷೆ ವಿಧಾನವನ್ನು ರೂಪಿಸಿದ. 1943 ರಲ್ಲಿ ಮಿನೆಸೋಟಾ ಮಲ್ಟಿಫೇಸಿಕ್ ಪರ್ಸನಾಲಿಟಿ ಇನ್ವೆಂಟರಿ (Minnesota Multiphasic Personality Inventory) ಹೊರಬಂದು ಬಹಳ ಹೆಚ್ಚು ಉಪಯೋಗಿಸಲ್ಪಡುವ ಪ್ರಶ್ನಾವಳಿಯಾಯಿತು.

ಎರಡನೆಯ ವಿಶ್ವಯುದ್ಧದ ನಂತರ ಸೈನ್ಯದಿಂದ ಹೊರಬಿದ್ದ, ಮಾನಸಿಕ ಸಮತೋಲನ ಕಳೆದುಕೊಂಡವರ ಮತ್ತು ಮಿದುಳಿನ ಆಘಾತಕ್ಕೆ ಒಳಗಾದವರ ಚಿಕಿತ್ಸೆಗೆ ನೈದಾನಿಕ ಮನೋವಿಜ್ಞಾನಿಗಳ ಅಗತ್ಯ ಬಿದ್ದ ಕಾರಣ ಶಿಕ್ಷಣ ಮತ್ತು ತರಬೇತಿ ಕಾರ್ಯಕ್ರಮಗಳು ವೇಗವಾಗಿ ಬೆಳದದ್ದಲ್ಲದೆ ವೃತ್ತಿ ಸಂಬಂಧಿ ನಿಯಮಗಳು ಮತ್ತು ಮಾದರಿಗಳು ವ್ಯವಸ್ಥಿತಗೊಂಡವು. ಫ್ರಾಯ್ಡ್‌ನ ಅನೇಕ ಕೃತಿಗಳು ಜರ್ಮನಿಯಿಂದಾಚೆ ಜನಪ್ರಿಯವಾದವು. 1920-30ರಲ್ಲಿ ಮನೋವಿಶ್ಲೇಷಣೆ ಪ್ರಭಾವಶಾಲಿಯಾಗಿತ್ತು. ನಾಝಿಗಳ ಕಿರುಕುಳ

ತಪ್ಪಿಸಿಕೊಳ್ಳಲು ಅಮೇರಿಕಾಗೆ ಬಂದ ಬುದ್ಧಿಜೀವಿಗಳು ಮನೋವಿಜ್ಞಾನವನ್ನು ಮುನ್ನೆಡೆಸಿದರು. ಸಮಷ್ಠಿವಾದ, ವರ್ತನಾವಾದ, ಗುಂಪು ಚಿಕಿತ್ಸೆಗಳು ಪ್ರಚಾರ ಪಡೆದವು. ಹಾನ್ಸ್ ಐಸೆಂಕ್ (Hans Eysenck), ಸ್ಕಿನ್ನರ್ (Skinner), ಎಲಿಸ್ (Ellis), ಬೆಕ್ (Beck), ಬಾಂಡುರಾ(Bandura), ಮುಂತಾದವರ ಪ್ರಭಾವದಿಂದ ಮನೋಚಿಕಿತ್ಸೆ ಮನೋಮಾಪನಕ್ಕಿಂತ ಹೆಚ್ಚು ಜನಪ್ರಿಯವಾಯಿತು.

ಸಮರಗಳ ನಂತರದ ದಿನಗಳಲ್ಲಿ ತನ್ನ ವೃತ್ತಿ-ಅನನ್ಯತೆಯನ್ನು ಈ ಶಾಖೆ ಸ್ಥಾಪಿಸಿಕೊಂಡಿತು. ವೇಗವಾಗಿ ಬೆಳೆಯುತ್ತಿದ್ದ ಈ ಕ್ಷೇತ್ರದಲ್ಲಿ ಸಂಶೋಧನೆ, ಅಧ್ಯಯನ ಮತ್ತು ಅನೇಕ ರೀತಿಯ ವೃತ್ತಿಗಳಲ್ಲಿ ತೊಡಗಿಸಿಕೊಳ್ಳಲು ತರಬೇತಿ ನೀಡುವ ಮತ್ತು ಡಾಕ್ಟರೇಟ್ ನೀಡುವ ಕಾರ್ಯಕ್ರಮಗಳು ಪ್ರಾರಂಭವಾದವು. ಇದೇ ಸಮಯದಲ್ಲಿ ರಾಜರ್ಸ್ (Rogers)ನ ಅನಿರ್ದೇಶಿತ ಚಿಕಿತ್ಸೆ, ಸಂಜ್ಞಾನಾತ್ಮಕ-ವರ್ತನಾ ಚಿಕಿತ್ಸೆಗಳು ಜನಪ್ರಿಯವಾಗಿ ಮನೋಮಾಪನದಲ್ಲಿ ಆಸಕ್ತಿ ಕಡಮೆಯಾಯಿತು. 1980 ರ ವೇಳೆಗೆ 400ಕ್ಕೂ ಹೆಚ್ಚು ಮನೋಚಿಕಿತ್ಸಾ ವಿಧಾನಗಳು ಪಟ್ಟಿಯಾದವು. ಅಮೇರಿಕಾದಲ್ಲಿ 1980ರ ಹೊತ್ತಿಗೆ ಇತರ ಮಾನಸಿಕ ಆರೋಗ್ಯ ತಜ್ಞರಂತೆ ಖಾಸಗಿ ಅಭ್ಯಾಸ ನಡೆಸಲು ಮತ್ತು ಆರೋಗ್ಯವಿಮಾ ಸೇವೆಯಿಂದ ಸಂಭಾವನೆ ಪಡೆದು ಕೆಲಸಮಾಡುವ ಹಕ್ಕು ದೊರೆಯಿತು. 21ನೆಯ ಶತಮಾನದಲ್ಲಿ ಈ ಕ್ಷೇತ್ರ ಬಹಳ ವೇಗವಾಗಿ ಬೆಳದದ್ದಲ್ಲದೆ ಅನೇಕ ಉಪಶಾಖೆಗಳನ್ನೂ ಹುಟ್ಟಿಸಿತು.

ನೈದಾನಿಕ ಮನೋವಿಜ್ಞಾನಿಗಳು ಸಾಧಾರಣವಾಗಿ ಮಾನಸಿಕ ಆರೋಗ್ಯ ವ್ಯವಸ್ಥೆಯಲ್ಲಿ ಮನೋಮಾಪನ, ಮನೋಚಿಕಿತ್ಸೆ, ಸಂಶೋಧನೆ, ಶಿಕ್ಷಣ. ಸಲಹೆ, ಮಾನಸಿಕ ಆರೋಗ್ಯಕ್ಕೆ ಸಂಬಂಧಿಸಿದ ಯೋಜನೆಗಳನ್ನು ರೂಪಿಸುವಲ್ಲಿ ಮತ್ತು ನಿರ್ವಹಣೆಯಲ್ಲಿ ತೊಡಗಿರುತ್ತಾರೆ. ಅನೇಕ ದೇಶಗಳಲ್ಲಿ ಇವರು ಆರೋಗ್ಯ ಸೇವಾಕರ್ತರೆಂದು ಗುರುತಿಸಲ್ಪಡುತ್ತಾರೆ. ನೈದಾನಿಕ ಮನೋವಿಜ್ಞಾನಿಗಳ ತರಬೇತಿಯಲ್ಲಿ ದೈಹಿಕ, ಸಾಮಾಜಿಕ, ವಿಕಾಸ, ನರವಿಜ್ಞಾನ, ಸಾಂಸ್ಕೃತಿಕ ಮನೋವೈಜ್ಞಾನಿಕ ವಿಷಯಗಳಲ್ಲದೆ, ಮನೋಮಾಪನ, ವ್ಯಕ್ತಿತ್ವ ಸಂಬಂಧಿ ಸಿದ್ಧಾಂತಗಳು, ಮನೋಚಿಕಿತ್ಸಾ ವಿಧಾನಗಳು ಮತ್ತು ಮನೋವೈದ್ಯಕೀಯದ ವಿಷಯಗಳು ಅಳವಡಿಸಿಕೊಳ್ಳಲಾಗುತ್ತದೆ ಹಾಗೂ ಪ್ರಾರಂಭದಿಂದಲೇ ಮಾನಸಿಕ ಆರೋಗ್ಯ ಸೇವಾ ಕೇಂದ್ರಗಳಲ್ಲಿ ಕೆಲಸ ಕಲಿಯುವ ಪರಿಪಾಠವಿದೆ. ವಿದ್ಯಾರ್ಥಿಗಳು ಮಕ್ಕಳು, ಹದಿಹರೆಯದವರು, ವೃದ್ಧರು, ಉದ್ಯೋಗಿಗಳು, ನರ ಆಘಾತಕ್ಕೆ ಒಳಗಾದವರು ಮತ್ತು ವೈವಾಹಿಕ ಸಮಸ್ಯೆ ಇರುವವರೊಂದಿಗೆ ಅಲ್ಲದೆ ಕಲಿಕೆ,ಮನೋಬೇನೆ, ವಿಕ್ಷಿಪ್ತಿ, ಬುದ್ಧಿಮಾಂದ್ಯತೆ, ಮಾದಕವಸ್ತು ದುರ್ಬಳಕೆ ಮುಂತಾದ ಸಮಸ್ಯೆ ಇರುವವರೊಂದಿಗೂ ಕೆಲಸಮಾಡುತ್ತಾರೆ.

ಇವರು ಕೆಲಸ ನಿರ್ವಹಿಸುವ ಸನ್ನಿವೇಶಗಳೂ ವಿವಿಧವಾಗಿವೆ. ಮನೋರೋಗಕ್ಕೆ ಮೀಸಲಾಗಿರುವ ಆಸ್ಪತ್ರೆಗಳಲ್ಲಿ, ಖಾಸಗಿ ದವಾಖಾನೆಗಳಲ್ಲಿ, ಶಿಶು ನಿರ್ದೇಶನಾಲಯದಲ್ಲಿ,

ಕೌಟುಂಬಿಕ ನ್ಯಾಯಾಲಯದಲ್ಲಿ, ಅಪರಾಧ ತನಿಖಾ ಕೇಂದ್ರಗಳಲ್ಲಿ, ಶಸ್ತ್ರಚಿಕಿತ್ಸಾ ತಂಡಗಳಲ್ಲಿ, ಮರಣಾಂತಕ ಕಾಯಿಲೆಗಳ ಶುಶ್ರೂಷಾಲಯಗಳಲ್ಲಿ, ನರವಿಜ್ಞಾನಾಲಯಗಳಲ್ಲಿ, ಶಾಲೆ, ಸಮುದಾಯ ಮತ್ತು ಉದ್ಯಮ ಕ್ಷೇತ್ರಗಳಲ್ಲಿ ದುರಂತಗಳು, ಅಪಘಾತಗಳು, ಆತ್ಮಹತ್ಯಾ ಆಲೋಚನೆ ಮುಂತಾದ ಸಂದರ್ಭದಲ್ಲಿ ತುರ್ತು ಚಿಕಿತ್ಸೆ, ಪುನಶ್ಚೇತನ ಕಾರ್ಯದಲ್ಲಿ - ಹೀಗೆ ವಿವಿಧ ರೀತಿಯ ಗುಂಪುಗಳಿಗೆ ವಿವಿಧ ರೀತಿಯ ಸೇವೆ ಒದಗಿಸುತ್ತಾರೆ. ಬೆಂಗಳೂರಿನ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆ ದೇಶದ ಪ್ರಮುಖ ತರಬೇತಿ ಮತ್ತು ಚಿಕಿತ್ಸಾ ಕೇಂದ್ರವಾಗಿದೆ.